RNI No. **KARBIL/2001/47147**



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜನವರಿ ೩, ೨೦೧೩ (ಪುಷ್ಯ ೧೩, ಶಕ ವರ್ಷ ೧೯೩೪)<br>Bangalore, Thursday, January 3, 2013 (Pushya 13, Shaka Varsha 1934) | ಸಂಚಿಕೆ ೧<br>Issue 1 |
|---|---|---|



## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು–1**

**ಸಂಖ್ಯೆ: ಆಸಾಂನಿ/20/ಆಡಳಿತ–1/1292–337/2009–10, ದಿನಾಂಕ: 27/11/2012**

**ವಿಷಯ** : ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯಕ್ಕೆ ನೇರ ನೇಮಕಾತಿಯಿಂದ ಆಯ್ಕೆಗೊಂಡಿರುವ 19 ಅಭ್ಯರ್ಥಿಗಳಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ನೇಮಕಾತಿ ಆದೇಶ

**ಉಲ್ಲೇಖ** : 1. ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ : ಪಿಎಸ್‌ಸಿ : 02/ಆರ್‌ಟಿಬಿ /2011 ದಿನಾಂಕ : 09–03–2012

2. ಸರ್ಕಾರದ ಆದೇಶ ಸಂಖ್ಯೆ : ಪಿಡಿ/119/ಎಸ್‌ಎಸ್‌ಎಂ /2012, ದಿನಾಂಕ : 22–11–2012

**ಕಛೇರಿ ಆದೇಶ ಸಂಖ್ಯೆ : ಆಡಳಿತ : 602/2012–13**

ಉಲ್ಲೇಖ (1)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಹಾಯಕ ನಿರ್ದೇಶಕರ (ಪತ್ರಾಂಕಿತ ಗುಂಪು "ಬಿ") ಹುದ್ದೆಗೆ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ಹಾಗೂ ತಿದ್ದುಪಡಿ ನಿಯಮ 2007ರನ್ವಯ, ಆಯ್ಕೆಗೊಂಡಿರುವ ಈ ಕೆಳಕಂಡ 19 ಅಭ್ಯರ್ಥಿಗಳನ್ನು ವೇತನ ಶ್ರೇಣಿ ರೂ. 22800–600–24600–700–28800–800–33600–900–39000–1050–43200 ರಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಅರ್ಹ ಪರೀಕ್ಷಾರ್ಥಿಯಾಗಿ (ಪ್ರೊಬೇಷನರ್) ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

| ಕ್ರ.ಸಂ. | ಶ್ರೀಯುತ/ಶ್ರೀಮತಿ |
|---|---|
| 1 | ಯಶಸ್ವಿನಿ, ಹೆಚ್.ಎಸ್.<br>#ಈಡಬ್ಲ್ಯೂ–13–387, ಶ್ರೀನಿವಾಸ ನಿಲಯ, 1ನೇ ಕ್ರಾಸ್, ವಿದ್ಯುತ್ ನಗರ, ಹಾಸನ–573 201 |
| 2 | ಅಶ್ವಿನಿ ಧನರಾಜ್,<br>ಕೇರಾಫ್ ಮಹಾಂತೇಶ್ ಜಿ. ಪುರಾಣಿಕ್, ರೇಣುಕಾ ನಿಲಯ, ಯಡ್ರಾಮಿ ಸುಂಬದ ರಸ್ತೆ,<br>ಯಡ್ರಾಮಿ, ಜೇವರ್ಗಿ ತಾಲ್ಲೂಕು, ಗುಲಬರ್ಗಾ–585 325 |
| 3 | ಸೋಮಶೇಖರ ಮೆಸ್ತಾ,<br># 1686, ಪ್ರಭಾತ್ ನಗರ, ಎಂ.ಜಿ. ರಸ್ತೆ, ಹೊನ್ನಾವರ, ಉತ್ತರ ಕನ್ನಡ ಜಿಲ್ಲೆ–581 334 |
| 4 | ಶಕುಂತಲಾ ಸಿ.ಎನ್.<br>#83, ಚಿಕ್ಕಹೊಸಗಾವಿ, ದೊಡ್ಡಹೊಸಗಾವಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ–571 425 |

| ಕ್ರ.ಸಂ. | ಶ್ರೀಯುತ/ಶ್ರೀಮತಿ |
|---|---|
| 5 | ಸುವರ್ಣ,<br># 19–06–10/2, ಬಿಎಸ್‌ಎಸ್‌ಕೆ ಲೇಔಟ್, ಬೇರಿಶಾಯಿ ಗಾರ್ಡನ್ ಹತ್ತಿರ, ಶಿವನಗರ (ಉತ್ತರ), ಬೀದರ್–585 401 |
| 6 | ಪದ್ಮಾವತಿ ಎಸ್.<br>#464, 1ನೇ ಹಂತ, ಇಡಬ್ಲ್ಯೂಎಸ್, 10 'ಬಿ' ಮುಖ್ಯರಸ್ತೆ, ಯಲಹಂಕ ಉಪ ನಗರ,<br>ಬೆಂಗಳೂರು ಉತ್ತರ, ಬೆಂಗಳೂರು–560 064 |
| 7 | ಶಿಲ್ಪ ಎಲ್.<br># 2504/2, 9ನೇ ಮುಖ್ಯರಸ್ತೆ, "ಶಿಲ್ಪ", ಸಿದ್ದವೀರಪ್ಪ ಬಡಾವಣೆ, ದಾವಣಗೆರೆ–577 004 |
| 8 | ಸುಜಾತ, ಕೇರಾಫ್ ನಾಗಶೆಟ್ಟಿ, ಕಳಗಿ, ಪ್ಲಾಟ್ ನಂ. 65, ತಿಲಕನಗರ, ಕುಸನೂರ ರೋಡ್, ಗುಲಬರ್ಗಾ–585 105 |
| 9 | ಶಿಲ್ಪ ಎಸ್.<br>#26, 2ನೇ ಬ್ಲಾಕ್, ಅಕ್ಷಯನಗರ, 5ನೇ ಕ್ರಾಸ್, ಟಿ.ಸಿ. ಪಾಳ್ಯ ಮುಖ್ಯ ರಸ್ತೆ, ರಾಮಮೂರ್ತಿ ನಗರ, ಬೆಂಗಳೂರು–560 016 |
| 10 | ಕುಮುದ ಆರ್.<br>ಕೇರಾಫ್ ಹೆಚ್.ಸಿ. ಕಲ್ಲಪ್ಪ, ನುಂಕಿ ಸಿದ್ದೇಶ್ವರ ನಿಲಯ, ಮಿತ್ರಾ ಲೇಔಟ್,<br>ಮೇದೆಹಳ್ಳಿ ರಸ್ತೆ, ಅಯ್ಯಪ್ಪ ದೇವಸ್ಥಾನ ಹತ್ತಿರ, ಚಿತ್ರದುರ್ಗ–577 501 |
| 11 | ರಜನಿ ಎಸ್.<br>#206, ಆನಂದಪುರ, ಸಾಗರ–577 412, ಶಿವಮೊಗ್ಗ ಜಿಲ್ಲೆ |
| 12 | ದೀಪಾ ವಿ. ಕೇರಾಫ್ ಯು. ಚಿದಾನಂದಪ್ಪ, 'ಎ' ಬ್ಲಾಕ್,<br>ಬಸವೇಶ್ವರ ನಗರ, 9ನೇ ಕ್ರಾಸ್, ಹಾವೇರಿ–581 110 |
| 13 | ವರಲಕ್ಷ್ಮೀ ಕೆ.ವಿ.<br>#118, ಕತ್ತಿಹೊಸಹಳ್ಳಿ, ಕೊಳ್ಳಿಗೇರೆ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು–561 203 |
| 14 | ಶಿವರೂಪ ಸಿ.ಆರ್.<br>#24, ಎನ್‌ಆರ್‌ಐ ಇನ್ಸ್‌ಟಿಟ್ಯೂಟ್ ಎದುರು, ಪಾಪರೆಡ್ಡಿಪಾಳ್ಯ,<br>ನಾಗರಭಾವಿ, 2ನೇ ಹಂತ, ಬೆಂಗಳೂರು–560 072 |
| 15 | ಮಹೇಂದ್ರ ಜೆ.<br>#1, 3ನೇ ಮೈನ್, ಹೆಬ್ಬಾಳ 1ನೇ ಹಂತ, ಮೈಸೂರು–570 016 |
| 16 | ಶಿಲ್ಪ ಸಿದ್ರಾಮ,<br>#2900, "ಹಂಬದ ನಿವಾಸ" 2ನೇ ಮುಖ್ಯರಸ್ತೆ,<br>ಮೀನಾಕ್ಷಿ ನಗರ, ಕಾಮಾಕ್ಷಿ ಪಾಳ್ಯ, ಬಸವೇಶ್ವರ ನಗರ, ಬೆಂಗಳೂರು–560 079 |
| 17 | ಶಾಝಿಯಾ ನಾಝ್ ಎ.ಎಸ್.<br># 145, ಶುಭಾ ಕ್ಲಿನಿಕ್ ಎದುರು, ವಲ್ಲಬಾಯಿ ರಸ್ತೆ, ಹಾಸನ–573 201 |
| 18 | ಅನೀತಾ ಎನ್.<br>#115, ತ್ರಿವೇಣಿ ನಗರ, ಟಿ. ನರಸೀಪುರ, ಮೈಸೂರು ಜಿಲ್ಲೆ–571 124 |
| 19 | ಆನಂದ ಕುಮಾರ<br># 184, ಕೆ.ಟಿ. ಹಳ್ಳಿ, ಪಾವಗಡ, ತುಮಕೂರು–572 116 |

ಅಭ್ಯರ್ಥಿಗಳು ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ವರದಿ ಮಾಡಿಕೊಂಡ ದಿನದಿಂದ 2 ವರ್ಷಗಳ ಪರೀಕ್ಷಾ ಅವಧಿಯಲ್ಲಿರುವರು. ಸದರಿ ಅವಧಿಯಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಹಾಯಕ ನಿರ್ದೇಶಕರ ಹುದ್ದೆಗೆ ನಿಗದಿಪಡಿಸಿರುವ ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ–1 ಮತ್ತು ಭಾಗ–2, ಇಲಾಖಾ ಪರೀಕ್ಷೆಗಳಲ್ಲಿ ಹಾಗೂ ಕನ್ನಡ ಭಾಷೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

ಅಭ್ಯರ್ಥಿಗಳು, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, 7ನೇ ಮಹಡಿ, 1ನೇ ಹಂತ, ಬಹುಮಹಡಿಗಳ ಕಟ್ಟಡ, ಡಾ॥ ಅಂಬೇಡ್ಕರ ವೀಧಿ, ಬೆಂಗಳೂರು–560 001, ಇವರ ಮುಂದೆ ಈ ಆದೇಶ ತಲುಪಿದ ದಿನಾಂಕದಿಂದ 15 ದಿನಗಳೊಳಗೆ ಹಾಜರಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು, ತಪ್ಪಿದಲ್ಲಿ ನೇಮಕಾತಿ ರದ್ದುಪಡಿಸಲಾಗುವುದು.

ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಅಭ್ಯರ್ಥಿಗಳ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 3ರನ್ವಯ ನಿಗದಿಪಡಿಸಲಾಗುವುದು. ಅಭ್ಯರ್ಥಿಗಳ ಜೇಷ್ಠತೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಆಯ್ಕೆ ಪಟ್ಟಿಯಲ್ಲಿ ನೀಡಿರುವ ಕ್ರಮದಂತೆ ನಿಗದಿಪಡಿಸಲಾಗುವುದು.

ಉಲ್ಲೇಖ (2)ರಲ್ಲಿನ ಸರ್ಕಾರದ ಆದೇಶದನ್ವಯ, ಮೇಲ್ಕಂಡ 19 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಸೂಪರ್ ನ್ಯೂಮರರಿ ಹುದ್ದೆಗಳೆಂದು 2 ವರ್ಷಗಳ ಅವಧಿಗೆ ಪರಿಗಣಿಸಿದ್ದು, ನಂತರ ನಿರ್ದೇಶನಾಲಯದ ಖಾಯಂ ಹುದ್ದೆಗಳಿಗೆ ನಿಯೋಜಿಸಲಾಗುವುದು.

ಪರೀಕ್ಷಾರ್ಥ ಅವಧಿಯಲ್ಲಿ ಸದರಿ ಅಭ್ಯರ್ಥಿಗಳಿಗೆ ಸಂಬಂಧಪಟ್ಟಂತಹ ತರಬೇತಿಯನ್ನು ನೀಡುವ ಕುರಿತು ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

**ಹೆಚ್. ಇ. ರಾಜಶೇಖರಪ್ಪ,**
ನಿರ್ದೇಶಕರು
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

**P.R. 188**

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು

## ರದ್ದತಿ ಆದೇಶ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಅಂತಿಮವಾಗಿ ಆಯ್ಕೆಯಾದ ರಾಮಣ್ಣ ಬಿನ್ ಕಾಮಣ್ಣ, ಅಲ್ಲಿಮೇದಾಗಲ್ಲಿ, ಸುರಪುರ, ಗುಲ್ಬರ್ಗಾ ಜಿಲ್ಲೆ ಇವರ ಅಂತಿಮ ಹೆಚ್ಚುವರಿ ಆಯ್ಕೆಯನ್ನು ಬ್ಯಾಕ್‌ಲಾಗ್ ಬೆರಳಚ್ಚುಗಾರರ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಿಂದ ರದ್ದುಪಡಿಸುವ ಬಗ್ಗೆ.

ಉಲ್ಲೇಖ:
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿ:21–11–2001 (ದಿನಾಂಕ; 22–11–2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಸೇನೆನಿ 2001 ದಿನಾಂಕ: 13–02–2001
3) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಡಿ 132 ಎಸ್‌ಎಡಿ 97 ದಿನಾಂಕ: 8–2–2000.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸೇನೆನಿ 2001 ದಿನಾಂಕ: 13–02–2001.
5) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 1–6–2002 (ದಿನಾಂಕ; 14–06–2002 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
6) ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಹೊರಡಿಸಿದ ಈ ಕಛೇರಿಯ ಮೊದಲನೇ ಅಧಿಸೂಚನೆ ಸಂಖ್ಯೆ: EST–1–274/2001–02 ದಿನಾಂಕ: 30–01–2002 (ದಿನಾಂಕ: 14–02–2002 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)
7) ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ಮೊದಲನೇ ಅಧಿಸೂಚನೆಗೆ ಸೇರಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿ ಸಂಖ್ಯೆ ]EST–1–274/2001–02 ದಿನಾಂಕ: 3–9–2011.
8) ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಸಂಬಂಧ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ಮೊದಲನೇ ಅಧಿಸೂಚನೆಗೆ ಸೇರಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್ ಲಾಗ್ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: ಇಎಸ್‌ಟಿ–1–274/2001–02 ದಿನಾಂಕ: 13–10–2011
9) ಪೊಲೀಸ್ ಅಧೀಕ್ಷಕರು , ಯಾದಗಿರಿ ಜಿಲ್ಲೆ, ಯಾದಗಿರಿ ಇವರ ಪತ್ರ ಸಂಖ್ಯೆ 208/ವಿಆರ್/ಡಿಎಸ್‌ಬಿ/ಯಾಜಿ//2012/1682 ದಿನಾಂಕ: 14–06–2012.
10) ರಾಮಣ್ಣ ಬೆರಳಚ್ಚುಗಾರರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ ಇವರು 20/– ರೂ.ಛಾಪಾ ಕಾಗದದಲ್ಲಿ ನೋಟರಿ ಸಮಕ್ಷಮ ಸಹಿ ಮಾಡಿ ಸಲ್ಲಿಸಿರುವ ಪ್ರಮಾಣ ಪತ್ರ ದಿನಾಂಕ: 01–08–2012.

**ಪ್ರಸ್ತಾವನೆ:–**

ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿನ ಬೆರಳಚ್ಚುಗಾರರ ವೃಂದದಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದ ಪ್ರಕಾರ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1) ರ

ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ಪರಿಶಿಷ್ಟ ಪಂಗಡದ ಅರ್ಹ ಅಭ್ಯರ್ಥಿಗಳಿಂದ ಉಲ್ಲೇಖ (6) ರ ಈ ಕಛೇರಿಯ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಕರೆಯಲಾಗಿತ್ತು.

| ಕ್ರ.ಸಂ | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಪಂಗಡ | ಬ್ಯಾಕ್‌ಲಾಗ್ ಹುದ್ದೆಯನ್ನು ಗುರ್ತಿಸಲ್ಪಟ್ಟ ಜಿಲ್ಲೆಯ ಹೆಸರು |
|---|---|---|---|
| 1 | ಸಾಮಾನ್ಯ ಅರ್ಹತಾ ಅಭ್ಯರ್ಥಿ | ಒಂದು | ಬೆಂಗಳೂರು ಜಿಲ್ಲಾ ನೇಮಕಾತಿ ಘಟಕ |

ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಅವುಗಳ ಪೈಕಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಅರ್ಜಿಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಅಂತಹ ಅಭ್ಯರ್ಥಿಗಳು ತಮ್ಮ ಬ್ಯಾಕ್‌ಲಾಗ್ ಅರ್ಜಿಯೊಂದಿಗೆ ಸಲ್ಲಿಸಿದ ನಿಗದಿತ ವಿದ್ಯಾರ್ಹತೆಯ ಅಂದರೆ S.S.L.C. ಮತ್ತು ಕನ್ನಡ ಟೈಪಿಂಗ್ ಸೀನಿಯರ್ ಅಂಕಪಟ್ಟಿಗಳ ಜೆರಾಕ್ಸ್ ಪ್ರತಿಗಳ ಆಧಾರದ ಮೇಲೆ ಅತಿ ಹೆಚ್ಚು ಶೇಕಡಾವಾರು ಅಂಕ ಗಳಿಸಿದ ಕೆಳಕಂಡ ಪರಿಶಿಷ್ಟ ಪಂಗಡದ ಒಬ್ಬ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಮೇಲ್ಕಂಡಂತೆ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಈ ಒಂದು ಬ್ಯಾಕ್‌ಲಾಗ್ ಹುದ್ದೆಯ ಮೀಸಲಾತಿಗೆ ಅನುಗುಣವಾಗಿ Merit ಆಧಾರದ ಮೇಲೆ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿ ಕೆಳಕಂಡ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿ ಇರುವ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕಕ್ಕೆ ಸೇರಿದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯನ್ನು ಅಭ್ಯರ್ಥಿಗಳ ಮಾಹಿತಿಗಾಗಿ ಉಲ್ಲೇಖ (7) ರನ್ವಯ ದಿನಾಂಕ: 3–09–2011 ರಂದು ಪ್ರಕಟಿಸಿ, ತದನಂತರ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಬ್ಯಾಕ್‌ಲಾಗ್ ನಿಯಮಗಳನ್ವಯ ಅಂತಿಮಗೊಳಿಸಿ ಒಟ್ಟಾರೆ ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿ ಇರುವ ಅಂತಿಮ ಬ್ಯಾಕ್‌ಲಾಗ್ ಬೆರಳಚ್ಚುಗಾರರ ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ಉಲ್ಲೇಖ(8)ರನ್ವಯ ದಿನಾಂಕ: 13–10–2011 ರಂದು ಪ್ರಕಟಿಸಲಾಯಿತು.

| ಕ್ರ.ಸಂ | ಅಭ್ಯರ್ಥಿಯ ಹೆಸರು | SC/ ST | ಆಯ್ಕೆ ಮಾಡಿದ ಮೀಸಲಾತಿ ವರ್ಗೀಕರಣ |
|---|---|---|---|
| 1 | ರಾಮಣ್ಣ S/O ಕಾಮಣ್ಣ,<br>ಅಲ್ಪಿ ಮೇದಾಗಲ್ಲಿ, ಸುರಪುರ ಗುಲ್ಬರ್ಗಾ ಜಿಲ್ಲೆ. | ST | ಪರಿಶಿಷ್ಟ ಪಂಗಡ<br>ಸಾಮಾನ್ಯ ಅರ್ಹತಾ ಅಭ್ಯರ್ಥಿ<br>ಬೆರಳಚ್ಚುಗಾರರ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿ |

ತದನಂತರ ಈ ರೀತಿ ಮೇಲ್ಕಂಡಂತೆ ಉಲ್ಲೇಖ (8) ರನ್ವಯ ದಿನಾಂಕ: 13–10–2011 ರಂದು ಪ್ರಕಟಿಸಿದ ಈ ಅಂತಿಮ ಆಯ್ಕೆಯ ಬ್ಯಾಕ್‌ಲಾಗ್ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಮೇಲ್ಕಂಡ ರಾಮಣ್ಣ ಇವರನ್ನು ಅಂತಿಮವಾಗಿ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಲು ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅವಶ್ಯಕತೆ ಇದ್ದುದರಿಂದ ಜಿಲ್ಲಾಧಿಕಾರಿಗಳು, ಯಾದಗಿರಿ ಜಿಲ್ಲೆ ಯಾದಗಿರಿ ಇವರಿಗೆ ದಿನಾಂಕ 12–03–2012ರಂದು ಈ ಕಛೇರಿಯಿಂದ ಪತ್ರ ಬರೆದು ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕಳುಹಿಸುವಂತೆ ಕೋರಲಾಯಿತು.

ಇದೇ ರೀತಿ ಸದರಿ ರಾಮಣ್ಣ ಇವರ ನಡತೆಯ ಬಗ್ಗೆ ಪೊಲೀಸ್ ಇಲಾಖೆಯಿಂದ ನೀಡುವ ಇವರ ಪೂರ್ವ ಚರಿತ್ರಾ ಪರಿಶೀಲನಾ ವರದಿಯ ಅಗತ್ಯವಿದ್ದುದರಿಂದ, ಜಿಲ್ಲಾ ಪೊಲೀಸ್ ಅಧೀಕ್ಷಕರು ಯಾದಗಿರಿ ಜಿಲ್ಲೆ, ಯಾದಗಿರಿ ಇವರಿಗೆ ದಿನಾಂಕ: 12–03–2012 ರಂದು ಈ ಕಛೇರಿಯಿಂದ ಪತ್ರ ಬರೆದು ಈ ಅಭ್ಯರ್ಥಿಯ ಪೂರ್ವ ಚರಿತ್ರಾ ಪರಿಶೀಲನಾ ವರದಿಯನ್ನು ಕಳುಹಿಸುವಂತೆ ಕೋರಲಾಯಿತು.

ಇದಕ್ಕೆ ಉತ್ತರವಾಗಿ ಪೊಲೀಸ್ ಅಧೀಕ್ಷಕರು, ಯಾದಗಿರಿ ಇವರು ಉಲ್ಲೇಖ(9)ರ ಅವರ ಪತ್ರದಲ್ಲಿ ಸದರಿ ಅಭ್ಯರ್ಥಿ ರಾಮಣ್ಣ ಸುರಪುರ ಇವರ ಗುಣ ಮತ್ತು ನಡತೆಯ ಬಗ್ಗೆ ವಿಚಾರಣೆ ಮಾಡಲು ಪಿ.ಐ.ಶೋರಾಪುರ ಪೊಲೀಸ್ ಠಾಣೆಯ ಪೇದೆಯವರನ್ನು ಕಳುಹಿಸಿದ್ದು, ಸದರಿಯವರು ಸಲ್ಲಿಸಿರುವ ವರದಿ ಪ್ರಕಾರ ಸದರಿ ಅಭ್ಯರ್ಥಿಯಾದ ರಾಮಣ್ಣ ಇವರು ಸದ್ಯ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು, ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಹೊಂದುವ ಮುನ್ನ ನಡೆಸುವ ಗುಣ ಮತ್ತು ನಡತೆ ಅರ್ಜಿಯ ವಿಚಾರಣೆಯನ್ನು ನಿರಾಕರಿಸಿರುತ್ತಾರೆಂದು ವರದಿ ಸಲ್ಲಿಸಿರುತ್ತಾರೆ. ಇದರಿಂದಾಗಿ ಸದರಿ ರಾಮಣ್ಣ ಇವರು ಈ ಇಲಾಖೆಯ ಈ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಹೊಂದಲು ಇಚ್ಛೆಹೊಂದಿಲ್ಲವೆಂಬುವ ಅಭಿಪ್ರಾಯಕ್ಕೆ ಬರಲಾಯಿತು.

ಆದರೆ ಮೇಲ್ಕಂಡ ರಾಮಣ್ಣ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವು ಬೇಗನೆ ಬಾರದೇ ಇದ್ದುದರಿಂದ ಜಿಲ್ಲಾಧಿಕಾರಿಗಳು ಯಾದಗಿರಿ ಇವರಿಗೆ ದಿನಾಂಕ: 29–03–2012 ರಂದು ಮತ್ತು 15–05–2012 ರಂದು ನೆನಪೋಲೆ ನೀಡಲಾಯಿತು. ಹಾಗೂ ಸದರಿ ಜಿಲ್ಲಾಧಿಕಾರಿಗಳಿಗೆ ಈ ರೀತಿ ಬರೆದ ಸದರಿ ಪತ್ರದ ಪ್ರತಿಗಳನ್ನು ಮೇಲ್ಕಂಡ ರಾಮಣ್ಣ ಇವರಿಗೂ ಕಳುಹಿಸಿ ಸದರಿ ಜಿಲ್ಲಾಧಿಕಾರಿಗಳನ್ನು ಭೇಟಿ ಮಾಡಿ ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಒದಗಿಸಬೇಕಾದ ಅಗತ್ಯ ದಾಖಲೆಗಳನ್ನು ಸದರಿ ಜಿಲ್ಲಾಧಿಕಾರಿಗಳಿಗೆ ತಕ್ಷಣವೇ ಒದಗಿಸಿ ನಿಮ್ಮ ಜಾತಿ ಸಿಂಧತ್ವ ಪ್ರಮಾಣ ಪತ್ರವನ್ನು ಈ ಕಛೇರಿಗೆ ಕಳುಹಿಸುವ ವ್ಯವಸ್ಥೆ ಮಾಡುವಂತೆ ಸದರಿ ಅಭ್ಯರ್ಥಿಗೆ ಸೂಚಿಸಲಾಯಿತು.

ಮೇಲ್ಕಂಡ ಸೂಚನೆಗೆ ಉತ್ತರವಾಗಿ ಮೇಲ್ಕಂಡ ರಾಮಣ್ಣ ಇವರು ದಿನಾಂಕ: 01–08–2012 ರಂದು ಈ ಕಛೇರಿಗೆ 20/– ರೂ.ಛಾಪಾ ಕಾಗದದಲ್ಲಿ ನೋಟರಿ ಸಮಕ್ಷಮ ಸಹಿ ಮಾಡಿದ ಪ್ರಮಾಣಪತ್ರವನ್ನು ಈ ಕಛೇರಿಗೆ ಸಲ್ಲಿಸಿ ಸದರಿ ಪ್ರಮಾಣ ಪತ್ರದಲ್ಲಿ ತಾನು ಈಗಾಗಲೇ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ ಇಲ್ಲಿ ಬೆರಳಚ್ಚುಗಾರನಾಗಿ ಸುಮಾರು 8–10 ವರ್ಷಗಳಿಂದ ಕೆಲಸ ಮಾಡುತ್ತಿರುತ್ತೇನೆಂದು ಹಾಗೂ ತಮಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರನಾಗಿ ನೌಕರಿ ಪಡೆಯಲು ಹಾಗೂ ಕೆಲಸ ಮಾಡಲು ತಮಗೆ ಇಚ್ಛೆ ಇರುವುದಿಲ್ಲವೆಂದು ಹಾಗೂ ತಾನು ಹಾಲಿ ಕೆಲಸ ಮಾಡುತ್ತಿರುವ ಬಳ್ಳಾರಿಯಲ್ಲಿರುವ ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲೇ ನನ್ನ ನೌಕರಿಯನ್ನು ಮುಂದುವರಿಸಲು ಇಚ್ಛಿಸುತ್ತೇನೆಯಾದ್ದರಿಂದ ನನ್ನ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಯಾದಗಿರಿ ಜಿಲ್ಲೆಯ ಜಿಲ್ಲಾಧಿಕಾರಿಗಳಿಂದ ತಾವು ಪಡೆಯುವ

ಅಥವಾ ನಾನು ಪಡೆದು ಸಲ್ಲಿಸುವ ಅಗತ್ಯವಿರುವುದಿಲ್ಲವೆಂದು ಈ ಕಛೇರಿಗೆ ತಿಳಿಸುತ್ತಾ, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆಂಗಳೂರು ನಗರ ಜಿಲ್ಲೆಯ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ಅಂತಿಮವಾಗಿ ಮಾಡಿರುವ ತನ್ನ ಅಂತಿಮ ಆಯ್ಕೆಯನ್ನು ರದ್ದುಪಡಿಸಬೇಕೆಂದು (Cancel ಮಾಡಬೇಕೆಂದು) ಹಾಗೂ ತನ್ನ ಬದಲಿಗೆ ಬೇರೊಬ್ಬ ಅಭ್ಯರ್ಥಿಯನ್ನು ಸದರಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಿಸಿಕೊಳ್ಳಬಹುದೆಂದು ಇದಕ್ಕೆ ತನ್ನ ತಂಟೆ ತಕರಾರುಗಳು ಮತ್ತು ಅಭ್ಯಂತರಗಳೇನೂ ಇರುವುದಿಲ್ಲವೆಂದು ಮೇಲ್ಕಂಡ ರಾಮಣ್ಣ ಇವರು ಈ ಕಛೇರಿಗೆ 20 ರೂ. ಛಾಪಾ ಕಾಗದದಲ್ಲಿ ಉಲ್ಲೇಖ(10) ರನ್ವಯ ಪ್ರಮಾಣಪತ್ರವನ್ನು ಸಲ್ಲಿಸಿರುತ್ತಾರೆ.

ಈ ರೀತಿ ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಹೆಚ್ಚುವರಿ ಪಟ್ಟಿಯಲ್ಲಿ ಅಂತಿಮವಾಗಿ ಆಯ್ಕೆಯಾದ ಸದರಿ ರಾಮಣ್ಣ ಇವರು ಮೇಲ್ಕಂಡಂತೆ ಉಲ್ಲೇಖ (10)ರನ್ವಯ ಪ್ರಮಾಣ ಪತ್ರವನ್ನು ಸಲ್ಲಿಸಿದ ಕಾರಣ ಹಾಗೂ ಪೊಲೀಸ್ ಅಧೀಕ್ಷಕರು, ಯಾದಗಿರಿ ಇವರು ಉಲ್ಲೇಖ(9)ರ ಅವರ ಪತ್ರದಲ್ಲಿ ಸದರಿ ಅಭ್ಯರ್ಥಿ ರಾಮಣ್ಣ ಇವರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಈ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಹೊಂದುವ ಮುನ್ನ ನಡೆಸುವ ಗುಣ ಮತ್ತು ನಡತೆ ಅರ್ಜಿಯ ವಿಚಾರಣೆಯನ್ನು ನಿರಾಕರಿಸಿರುತ್ತಾರೆಂದು ವರದಿ ಸಲ್ಲಿಸಿರುವ ಹಿನ್ನೆಲೆಯಲ್ಲಿ ಉಲ್ಲೇಖ (8) ರನ್ವಯ ದಿನಾಂಕ:13–10–2011 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳಿಗೆ ಮೀಸಲಿಟ್ಟ ಬೆರಳಚ್ಚುಗಾರರ ಅಂತಿಮ ಬ್ಯಾಕ್‌ಲಾಗ್ ಹುದ್ದೆಯ ಹೆಚ್ಚುವರಿ ಪಟ್ಟಿಯಿಂದ ಇವರ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ಇವರ ಕೋರಿಕೆಯಂತೆ ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ: EST–1–274/2001–02 ದಿನಾಂಕ: 15–11–2012**

**ರದ್ದತಿ ಆದೇಶ**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (8) ರನ್ವಯ ದಿನಾಂಕ: 13–10–2011 ರಂದು ಪ್ರಕಟಿಸಿರುವ ಈ ಇಲಾಖೆಯ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳಿಗೆ ಮೀಸಲಿಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಬೆರಳಚ್ಚುಗಾರರೆಂದು ಅಂತಿಮವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ರಾಮಣ್ಣ ಇವರ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಬೆರಳಚ್ಚುಗಾರರ ಅಂತಿಮ ಬ್ಯಾಕಲಾಗ್ ಹೆಚ್ಚುವರಿ ಆಯ್ಕೆಯನ್ನು ಇವರ ಕೋರಿಕೆಯಂತೆ ಉಲ್ಲೇಖ (8)ರನ್ವಯ ದಿನಾಂಕ: 13–10–2011 ರಂದು ಪ್ರಕಟಿಸಿದ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಪರಿಶಿಷ್ಟ ಪಂಗಡದ ಸಾಮಾನ್ಯ ಅರ್ಹತಾ ಅಭ್ಯರ್ಥಿಗಳ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ.(Cancel ಮಾಡಲಾಗಿದೆ)

ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿಯಾದ ರಾಮಣ್ಣ ಇವರು ಇನ್ನು ಮುಂದೆ ಈ ಇಲಾಖೆಯ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ರೀತಿಯ ನೇಮಕಾತಿ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16–03–2002 ರ ಅಂತ್ಯಕ್ಕೆ ಅಭ್ಯರ್ಥಿ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1 | (ಅಭ್ಯರ್ಥಿಯ ಹಿಂದಿನ ವಿಳಾಸ) ರಾಮಣ್ಣ S/O ಕಾಮಣ್ಣ, ಅಲ್ಪಿ ಮೇದಾಗಲ್ಲಿ, ಸುರಪುರ, ಗುಲ್ಬರ್ಗಾ ಜಿಲ್ಲೆ | 01–06–1968 | 33–09–15 | 1)S.S.L.C 35.666 2) ಕನ್ನಡ ಬೆರಳಚ್ಚು ಸೀನಿಯರ್ 83.500 ಒಟ್ಟು 119.166 ಸರಾಸರಿ ಶೇಕಡಾವಾರು ಅಂಕಗಳು 59.583 | ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದಲ್ಲಿ ಗುರ್ತಿಸಿದ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ದಿನಾಂಕ: 13–10–2011 ರ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ರಾಮಣ್ಣ ಇವರ ಬೆಂಗಳೂರು ಜಿಲ್ಲಾ ನೇಮಕಾತಿ ಘಟಕದ ಬೆರಳಚ್ಚುಗಾರರ ಅಂತಿಮ ಬ್ಯಾಕ್‌ಲಾಗ್ ಆಯ್ಕೆಯನ್ನು ಪರಿಶಿಷ್ಟ ಪಂಗಡದ ಹೆಚ್ಚುವರಿ ಪಟ್ಟಿಯಿಂದ ರದ್ದುಪಡಿಸಿದೆ. |

**ಆದೋನಿ ಸಯ್ಯದ್ ಸಲೀಂ**
ಆಯ್ಕೆ ಪ್ರಾಧಿಕಾರಿ ಹಾಗೂ
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು

**P.R. 190**

**FORM-1**

**(See Rule 9)**

**Department of Education**

**Block Education Office, Indi,**

**Date 18-12-2012**

**NOTIFICATION**

Shri/Smt. **ABDULGAFOOR MAHAMMEDHANIF MUJAWAR** Working as Assistant Teacher in the GOVT. U.H.P.S. HIRE-RUGI Department of/Office of Block Education Office Indi is permitted to change his name to **ABDULGAFOOR MAHAMMEDHANIF MAKANDAR.**

Signature and Designation of the Appointing Authority

**PD-C/N. 147**

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಹಾಸನ ಜಿಲ್ಲೆ, ಹಾಸನ**

**ಅಧಿಕೃತ ಜ್ಞಾಪನ**

**ನಂ.ಗ್ರಾ.ಲೆ.ಸಿಬ್ಬಂದಿ–24/2012–13. ದಿನಾಂಕ: 22–11–2012**

**ವಿಷಯ:–** ಹಾಸನ ಜಿಲ್ಲಾ ಕಂದಾಯ ಘಟಕದಲ್ಲಿ 2012 ನೇ ಸಾಲಿನಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆ ಆದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ:–**
1. ಸರ್ಕಾರದ ಪತ್ರದ ಸಂಖ್ಯೆ: ಕಂ.ಇ. 33 ಬಿಎಸ್‌ಸಿ 2012, ದಿನಾಂಕ: 21/06/2012.
2. ಈ ಕಛೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 30/06/2012.
3. ಈ ಕಛೇರಿಯ ಸಮ ಸಂಖ್ಯೆ ಪ್ರಕಟಣೆ ದಿನಾಂಕ: 24/08/2012.
4. ಈ ಕಛೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 01/10/2012.
5. ಈ ಕಛೇರಿಯ ಸಮ ಸಂಖ್ಯೆ ಅಧಿಕೃತ ಜ್ಞಾಪನ ದಿನಾಂಕ: 11/10/2012.
6. ಈ ಕಛೇರಿಯ ಸಮ ಸಂಖ್ಯೆ ಆದೇಶ ದಿನಾಂಕ: 19/11/2012.

ಹಾಸನ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ 2012 ನೇ ಸಾಲಿನಲ್ಲಿ ಖಾಲಿ ಇರುವ 43 ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿಮಾಡುವ ಸಂಬಂಧ ಕರ್ನಾಟಕ ಸಾಮಾನ್ಯ ಸೇವೆಗಳು (ರೆವೆನ್ಯೂ ಸಬಾರ್ಡಿನೇಟ್ ಬ್ರಾಂಚ್, ಕೇಡರ್ ಅಂಡ್ ರಿಕ್ರೂಟ್‌ಮೆಂಟ್) ನಿಯಮಗಳನ್ವಯ ಉಲ್ಲೇಖ (5) ರಲ್ಲಿ ಒಟ್ಟು 43 ಜನ ಅರ್ಹ ಅಭ್ಯರ್ಥಿಗಳನ್ನು ಮೆರಿಟ್ ಮತ್ತು ವರ್ಗವಾರು ಆಧಾರದ ಮೇಲೆ ಆಯ್ಕೆ ಮಾಡಿ ನೇಮಾಕಾತಿ ಆದೇಶ ನೀಡಲಾಗಿರುತ್ತದೆ.

ನೇಮಕಾತಿ ಆದೇಶ ನೀಡಿದ ಒಟ್ಟು 43 ಅಭ್ಯರ್ಥಿಗಳ ಪೈಕಿ ಈ ಕೆಳಕಂಡ 10 ಜನ ಅಭ್ಯರ್ಥಿಗಳು ನೇಮಕಾತಿ ಆದೇಶದಲ್ಲಿನ ಕ್ರಮ ಸಂಖ್ಯೆ 1 ರ ಷರತ್ತಿನಂತೆ ನೇಮಕಾತಿ ಆದೇಶ ಸ್ವೀಕರಿಸಿದ 15 ದಿನಗಳೊಳಗೆ ಕರ್ತವ್ಯದ ಮೇಲೆ ಹಾಜರಾಗಿರುವುದಿಲ್ಲ.

ಆದ್ದುದರಿಂದ ಉಲ್ಲೇಖ (6) ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು–1977 ರ ನಿಯಮ–18 ರಂತೆ ಕೆಳಕಂಡ ಅಭ್ಯರ್ಥಿಗಳ ನೇಮಕಾತಿ ಆದೇಶಗಳನ್ನು ರದ್ದುಪಡಿಸಿ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು | ತಂದೆ ಹೆಸರು | ನೇಮಕ ಆಗಿರುವ ಸ್ಥಳ | ಆಯ್ಕೆ ಆಗಿರುವ ವರ್ಗ |
|---|---|---|---|---|
| 1 | **ಮಂಜುನಾಥ. ಕೆ.ಬಿ** | ಬೋರಯ್ಯ | **ನಾಡ ಕಛೇರಿ, ಹಾನುಬಾಳು.** ಸಕಲೇಶಪುರ ತಾಲ್ಲೂಕು. | ಸಾಮಾನ್ಯ |
| 2 | **ಪ್ರತಿಭ.ಪಿ.** | ಪ್ರಕಾಶ್ ದಾವಣಗೆರೆ | **ಹನ್ಯಾಳು ವೃತ್ತ.** ರಾಮನಾಥಪುರ ಹೋಬಳಿ. ಅರಕಲಗೂಡು ತಾಲ್ಲೂಕು. | ಸಾಮಾನ್ಯ–ಮಹಿಳೆ |
| 3 | **ದೇವರಾಜು.ಹೆಚ್.** | ಹನುಮಂತ ರಾಯಪ್ಪ | **ಹೊಂಗಡಹಳ್ಳಿ ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. | ಸಾಮಾನ್ಯ–ಗ್ರಾಮೀಣ |
| 4 | **ಬಸವರಾಜು.ಜಿ.** | ಹಾಲಪ್ಪ.ಜಿ. | **ಕ್ಯಾಮನಹಳ್ಳಿ ವೃತ್ತ.** ಹಾನುಬಾಳು ಹೋಬಳಿ. ಸಕಲೇಶಪುರ ತಾಲ್ಲೂಕು. | ಪರಿಶಿಷ್ಟ ಜಾತಿ–ಸಾಮಾನ್ಯ |
| 5 | **ನಾಗವೇಣಿ. ಜಿ. ಮಾಗಡಿ** | ಗುಲಪ್ಪ ಮಾಗಡಿ | **ಹಂಡ್ರಂಗಿ ವೃತ್ತ.** ಕೊಣನೂರು ಹೋಬಳಿ. ಅರಕಲಗೂಡು ತಾಲ್ಲೂಕು. | ಪ್ರವರ್ಗ 3ಬಿ–ಮಹಿಳೆ |

| ಕ್ರ. ಸಂ. | ಅಭ್ಯರ್ಥಿಯ ಹೆಸರು | ತಂದೆ ಹೆಸರು | ನೇಮಕ ಆಗಿರುವ ಸ್ಥಳ | ಆಯ್ಕೆ ಆಗಿರುವ ವರ್ಗ |
|---|---|---|---|---|
| 6 | **ಈರಪ್ಪ ಕಿಂದರಿ** | ಸಿದ್ದಪ್ಪ | **ವಳಲಹಳ್ಳಿ ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. | ಪರಿಶಿಷ್ಟ ಪಂಗಡ–ಗ್ರಾಮೀಣ |
| 7 | **ಕೋಟ್ರೇಶ.ಡಿ** | ಸಿದ್ದಪ್ಪ.ಡಿ. | **ಅತ್ತಿಹಳ್ಳಿ ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. | ಪ್ರವರ್ಗ 2ಎ–ಗ್ರಾಮೀಣ |
| 8 | **ಚಿದಾನಂದ ಪವಾಡಿ ಕಿತ್ತೂರು.** | ಪವಾಡಿ | **ದೇವಾಲದಕೆರೆ ವೃತ್ತ.** ಹಾನುಬಾಳು ಹೋಬಳಿ. ಸಕಲೇಶಪುರ ತಾಲ್ಲೂಕು. | ಸಾಮಾನ್ಯ–ಯೋಜನ ನಿರಾಶ್ರಿತರು |
| 9 | **ಶ್ರೀನಿವಾಸ** | ಗೋವಿಂದಪ್ಪ | **ನಾಡ ಕಛೇರಿ, ಮಲ್ಲಿಪಟ್ಟಣ.** ಅರಕಲಗೂಡು ತಾಲ್ಲೂಕು. | ಸಾಮಾನ್ಯ–ಮಾಜಿ ಸೈನಿಕರು |
| 10 | **ನವಾಜ್ ಮೊಹಮ್ಮದ್.ಕೆ.ಎಂ.** | ಮುನ್ನಾವರ್ | **ಹೆತ್ತೂರು ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. | ಪ್ರವರ್ಗ 2ಬಿ–ಸಾಮಾನ್ಯ |

ಈ ಮೇಲ್ಕಂಡ ಅಭ್ಯರ್ಥಿಗಳ ಬದಲಾಗಿ ಕಾಯ್ದಿರಿಸಿದ ಪಟ್ಟಿಯಲ್ಲಿರುವ ಸಮ ಮೀಸಲಾತಿಯ ಈ ಕೆಳಕಂಡ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿಯ 11600–200–12000–250–13000–300–14200–350–15600–400–17200–450–19000–500–21000 ರಲ್ಲಿ ನೇಮಕಾತಿ ಮಾಡಿ ಆದೇಶಿಸಿರುತ್ತದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ತಂದೆಯ ಹೆಸರು | ವಿಳಾಸ | ಆಯ್ಕೆ ಆಗಿರುವ ವರ್ಗ | ನೇಮಕಾತಿ ಮಾಡಿರುವ ವೃತ್ತದ ಹೆಸರು |
|---|---|---|---|---|---|
| 1 | **ರಜನಿಕಾಂತ್.ಆರ್.ಎಲ್.** | ಲೋಕೇಶ್. ಎನ್.ಎಂ. | ನರಸೀಪುರ ಗ್ರಾಮ, ಹಿರಿಸದರಹಳ್ಳಿ ಅಂಚೆ, ಅರಸೀಕೆರೆ ತಾಲ್ಲೂಕು, ಹಾಸನ–573144. | ಸಾಮಾನ್ಯ | **ನಾಡ ಕಛೇರಿ, ಹಾನುಬಾಳು.** ಸಕಲೇಶಪುರ ತಾಲ್ಲೂಕು. |
| 2 | **ಮಹೇಶ್ವರಿ.ಜಿ.** | ಗಿರೀಶ್.ಎಂ. | ನಂ. 34, ಟೀಚಿಂಗ್ ಸ್ಟಾಫ್ ಕ್ವಾರ್ಟರ್ಸ್, ಎಸ್.ಎಸ್.ಎಂ.ಸಿ. ಕ್ಯಾಂಪಸ್, ಅಗಲಕೋಟೆ, ತುಮಕೂರು–572107. | ಸಾಮಾನ್ಯ–ಮಹಿಳೆ | **ಹನ್ಬಾಳು ವೃತ್ತ.** ರಾಮನಾಥಪುರ ಹೋಬಳಿ. ಅರಕಲಗೂಡು ತಾಲ್ಲೂಕು. |
| 3 | **ಚಂದ್ರಕಾಂತ್ ಗುಬ್ಬೆವಾಡ್** | ಭೂತಳಿ | ಯಂಕಂಚಿ ಅಂಚೆ, ಸಿಂದಗಿ ತಾಲ್ಲೂಕು, ಬಿಜಾಪುರ–586128. | ಸಾಮಾನ್ಯ–ಗ್ರಾಮೀಣ | **ಹೊಂಗಡಹಳ್ಳಿ ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. |
| 4 | **ನಾಗೇಶ್.ಎಸ್.** | ಸಿದ್ದಯ್ಯ | ಬಸವಟ್ಟಿ ಗ್ರಾಮ, ಸಂತೆಮಾರಹಳ್ಳಿ ಅಂಚೆ, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ–571115. | ಪರಿಶಿಷ್ಟ ಜಾತಿ–ಸಾಮಾನ್ಯ | **ಕ್ಯಾಮನಹಳ್ಳಿ ವೃತ್ತ.** ಹಾನುಬಾಳು ಹೋಬಳಿ. ಸಕಲೇಶಪುರ ತಾಲ್ಲೂಕು. |
| 5 | **ಶಿಲ್ಪ.ಎ.ಎಂ.** | ಮಹದೇವಪ್ಪ | ಅರೇನಹಳ್ಳಿ ಗ್ರಾಮ, ಬೀರಬಳ್ಳಿ ಅಂಚೆ, ಕೆ.ಆರ್.ಪೇಟೆ, ಮಂಡ್ಯ–571605. | ಪ್ರವರ್ಗ 3ಬಿ–ಮಹಿಳೆ | **ಹಂಡ್ರಂಗಿ ವೃತ್ತ.** ಕೊಣನೂರು ಹೋಬಳಿ. ಅರಕಲಗೂಡು ತಾಲ್ಲೂಕು. |
| 6 | **ಹನುಮಂತಪ್ಪ ಕಲಸಾಪುರ** | ಬಸಪ್ಪ.ಕೆ. | ಹೈರದ ಅಂಚೆ, ಹೂವಿನಹಡಗಲಿ ತಾಲ್ಲೂಕು, ಬಳ್ಳಾರಿ–583217 | ಪರಿಶಿಷ್ಟ ಪಂಗಡ–ಗ್ರಾಮೀಣ | **ವಳಲಹಳ್ಳಿ ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. |
| 7 | **ಅಯ್ಯನಹಳ್ಳಿ ಕೊಟ್ರೇಶ** | ಅಯ್ಯನಹಳ್ಳಿ ಮಲ್ಲೆಪ್ಪ | ಹರಳು ಅಂಚೆ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ–583134 | ಪ್ರವರ್ಗ 2ಎ–ಗ್ರಾಮೀಣ | **ಅತ್ತಿಹಳ್ಳಿ ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ತಂದೆಯ ಹೆಸರು | ವಿಳಾಸ | ಆಯ್ಕೆ ಆಗಿರುವ ವರ್ಗ | ನೇಮಕಾತಿ ಮಾಡಿರುವ ವೃತ್ತದ ಹೆಸರು |
|---|---|---|---|---|---|
| 8 | **ರಮೇಶ್ ಮಾಲಿ** | ಚಂದ್ರಶೇಖರ್ | ನಾಗನೂರು ಅಂಚೆ, ಜಮಖಂಡಿ ತಾಲ್ಲೂಕು, ಬಾಗಲಕೋಟೆ 587301. | ಸಾಮಾನ್ಯ– ಯೋಜನ ನಿರಾಶ್ರಿತರು | **ದೇವಾಲದಕೆರೆ ವೃತ್ತ.** ಹಾನುಬಾಳು ಹೋಬಳಿ. ಸಕಲೇಶಪುರ ತಾಲ್ಲೂಕು. |
| 9 | **ಪ್ರಕಾಶ.ಸಿ.ಎನ್.** | ಲೇ. ನಂಜೇಗೌಡ | ಚಿಕ್ಕಬಸವನಹಳ್ಳಿ ಗ್ರಾಮ, ಕೌಶಿಕ ಅಂಚೆ, ಹಾಸನ ತಾಲ್ಲೂಕು, ಹಾಸನ–573201. | ಸಾಮಾನ್ಯ– ಮಾಜಿ ಸೈನಿಕರು | **ನಾಡ ಕಛೇರಿ, ಮಲ್ಲಿಪಟ್ಟಣ.** ಅರಕಲಗೂಡು ತಾಲ್ಲೂಕು. |
| 10 | **ದವಲಸ** | ಇಸ್ಮಾಯಲ್ ಸಾಬ್ ಅಂಗಡಿ | ಕೆರುತಗಿ ಅಂಚೆ, ಸಿಂದಗಿ ತಾಲ್ಲೂಕು, ಬಿಜಾಪುರ–586118. | ಪ್ರವರ್ಗ 2ಬಿ– ಸಾಮಾನ್ಯ | **ಹೆತ್ತೂರು ವೃತ್ತ.** ಹೆತ್ತೂರು ಹೋಬಳಿ. ಸಕಲೇಶಪುರ ತಾಲ್ಲೂಕು. |

**ಷರತ್ತುಗಳು:–**

1. ಅಭ್ಯರ್ಥಿಯು ಈ ಆದೇಶ ತಲುಪಿದ 15 ದಿನಗಳೊಳಗೆ ಮೂಲ ದಾಖಲಾತಿಗಳೊಂದಿಗೆ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವುದು. ತಪ್ಪಿದಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮ 18 ರನ್ವಯ ನೇಮಕಾತಿಯನ್ನು ರದ್ದುಪಡಿಸಲಾಗುತ್ತದೆ.
2. ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರಕ್ಕೆ ಸಂಬಂಧಿಸಿದ ಇಬ್ಬರು ಗಣ್ಯ ವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸುವುದು.
3. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಸರ್ಕಾರಿ ವೈದ್ಯರಿಂದ ಪಡೆದ ವೈದ್ಯಕೀಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರುಪಡಿಸುವುದು.
4. ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ/ಪ್ರವರ್ಗ–1/2ಎ/2ಬಿ/3ಎ/3ಬಿ, ಗ್ರಾಮೀಣ, ಯೋಜನಾ ನಿರಾಶ್ರಿತರು ಹಾಗೂ ಇತ್ಯಾದಿ ಮೀಸಲಾತಿಯಡಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳಿಗೆ, ಅವರು ಸಲ್ಲಿಸಿರುವ ಸದರಿ ಪ್ರಮಾಣ ಪತ್ರಗಳ ಸಿಂಧುತ್ವದ ಬಗ್ಗೆ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಂದ / ಸಕ್ಷಮ ಪ್ರಾಧಿಕಾರದಿಂದ ನೀಡಬೇಕಾದ ಸಿಂಧುತ್ವ ಪ್ರಮಾಣ ಪತ್ರಗಳನ್ನು ಹಾಗೂ ಗುಣ ನಡತೆ ಹಾಗೂ ಪೂರ್ವ ಚಾರಿತ್ಯದ ಬಗ್ಗೆ ಸಂಬಂಧಪಟ್ಟ ಪೋಲೀಸ್ ಅಧೀಕ್ಷಕರ ವರದಿಯನ್ನು ಕಾಯ್ದಿರಿಸಿ ನೇಮಕಾತಿ ಆದೇಶ ನೀಡಲಾಗಿರುತ್ತದೆ.
5. ಈ ನೇಮಕಾತಿಯು ಅಭ್ಯರ್ಥಿಯು ಹಾಜರುಪಡಿಸಿರುವ ಪಿ.ಯು.ಸಿ. ಅಂಕ ಪಟ್ಟಿಯ ಸತ್ಯಾಪನೆಗೆ ಒಳಪಟ್ಟಿರುತ್ತದೆ.
6. ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುತ್ತದೆ.
7. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ 2 ವರ್ಷಗಳ ಅವಧಿಯು ಪರಿವೀಕ್ಷಣೆ ಅವಧಿ (Probation Period) ಆಗಿರುತ್ತದೆ. ಈ ಅವಧಿಯಲ್ಲಿ **(1) ಅಕೌಂಟ್ಸ್ ಲೋಯರ್ (2) ರೆವಿನ್ಯೂ ಲೋಯರ್ (3) ಕಂಪ್ಯೂಟರ್ ಲಿಟ್ರಸಿ ಟೆಸ್ಟ್ ಮತ್ತು (4) ಕನ್ನಡ ಭಾಷಾ ಪರೀಕ್ಷೆ (SSLC ಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ) ಗಳಲ್ಲಿ ಉತ್ತೀರ್ಣರಾಗುವುದು**. ತಪ್ಪಿದಲ್ಲಿ ಹಾಗೂ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಸೇವೆಯಿಂದ ತೆಗೆದು ಹಾಕಲಾಗುವುದು.
8. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "**ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು.**"
9. ಅಭ್ಯರ್ಥಿಯು ಸರ್ಕಾರದ ಆದೇಶ ನಂ. FD/SPL/04/PET/05 ದಿನಾಂಕ 31/03/2006 ರಂತೆ ಹೊಸ ನಿವೃತ್ತಿ ವೇತನ ಯೋಜನೆಗೆ ಒಳಪಟ್ಟಿರುತ್ತಾರೆ.
10. ಸರ್ಕಾರದ ಸುತ್ತೋಲೆ ಸಂ.ಕಂ.ಇ/54/ಬಿಎಸ್‌ಸಿ/2007, ದಿನಾಂಕ: 27/3/2007 ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ಹಾಸನ ಜಿಲ್ಲೆಯಲ್ಲಿ ಕನಿಷ್ಟ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.
11. ಅಭ್ಯರ್ಥಿಗಳು, ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ದರಾಗಿರುತ್ತಾರೆ.
12. ಅಭ್ಯರ್ಥಿಯು ರೂ. 1000/– ಭದ್ರತಾ ಠೇವಣಿಯನ್ನು ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸುವುದು ಹಾಗೂ ತಹಶೀಲ್ದಾರರು ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಪಡೆದು ಸರ್ಕಾರಕ್ಕೆ ಆಧಾರ ಮಾಡಿಕೊಳ್ಳುವುದು.
13. ಅಭ್ಯರ್ಥಿಯ ಜೇಷ್ಠತೆಯು ಈ ಅಧಿಕೃತ ಜ್ಞಾಪನದಲ್ಲಿನ ಕ್ರಮದನುಸಾರವಾಗಿಯೇ ಇರತಕ್ಕದ್ದು ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಕಾನೂನು ತಿದ್ದುಪಡಿಗಳಿಗೆ ಒಳಪಟ್ಟಿರುತ್ತದೆ.

ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು,
ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರ
ಹಾಸನ ಜಿಲ್ಲೆ, ಹಾಸನ.

P.R. 191